<u>ಕರ್ನಾಟಕ ವಿಧಾನ ಪರಿಷತ್ತು</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 675
ಉತ್ತರಿಸಬೇಕಾದ ದಿನಾಂಕ : 23.07.2019
ವಿಧಾನ ಪರಿಷತ್ ಸದಸ್ಯರು : ಶ್ರೀ ಎನ್.ಅಪ್ಪಾಜಿಗೌಡ
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ಜಿಲ್ಲೆಯಲ್ಲಿ ಕೆ.ಆರ್.ಐ.ಡಿ.ಎಲ್ ನಿಂದ ಕಳೆದ 05 ವರ್ಷಗಳಿಂದ ಕೈಗೊಂಡಿರುವ ಕಾಮಗಾರಿಗಳು ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ಮಂಡ್ಯ ಜಿಲ್ಲೆಯಲ್ಲಿ ಕೆಆರ್ಐಡಿಎಲ್, ವಿಭಾಗವು ಕಳೆದ 5 ವರ್ಷಗಳಿಂದ ತಾಲ್ಲೂಕುವಾರು ಕೈಗೊಂಡಿರುವ ಕಾಮಗಾರಿಗಳ ವಿವರ ಕೆಳಕಂಡಂತಿವೆ. |

| ಕ್ರ ಸಂ: | ತಾಲ್ಲೂಕು | ಕಾಮಗಾರಿಗಳ ಸಂ: |
|---|---|---|
| 1 | ಮಂಡ್ಯ | 395 |
| 2 | ಮದ್ದೂರು | 171 |
| 3 | ಮಳವಳ್ಳಿ | 90 |
| 4 | ಪಾಂಡವಪುರ | 255 |
| 5 | ಶ್ರೀರಂಗಪಟ್ಟಣ | 126 |
| 6 | ಕೆ.ಆರ್.ಪೇಟೆ | 152 |
| 7 | ನಾಗಮಂಗಲ | 160 |
| | **ಒಟ್ಟು** | **1349** |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಇವುಗಳಲ್ಲಿ ಪೂರ್ಣಗೊಂಡಿರುವ ಕಾಮಗಾರಿಗಳು ಎಷ್ಟು; ಹಾಗೂ ಬಳಕೆಯಾದ ಅನುದಾನವೆಷ್ಟು; (ತಾಲ್ಲೂಕುವಾರು ವಿವರವಾದ ಮಾಹಿತಿ ನೀಡುವುದು) | ಕೆಆರ್ಐಡಿಎಲ್ ಸಂಸ್ಥೆಯಿಂದ ಕೈಗೊಂಡಿರುವ ಕಾಮಗಾರಿಗಳಿಗೆ ತಾಲ್ಲೂಕುವಾರು ಬಳಕೆ ಮಾಡಲಾದ ಅನುದಾನ ಮತ್ತು ವಿವರಗಳು ಕೆಳಕಂಡಂತಿವೆ. ವಿವರವಾದ ಮಾಹಿತಿಯನ್ನು ಅನುಬಂಧ- 1 ರಲ್ಲಿ ಲಗತ್ತಿಸಿದೆ. |

| ತಾಲ್ಲೂಕು | ಪೂರ್ಣಗೊಂಡ ಕಾಮಗಾರಿಗಳ ಸಂಖ್ಯೆ | ಬಳಕೆಯಾದ ಅನುದಾನ ರೂ.ಲಕ್ಷಗಳಲ್ಲಿ |
|---|---|---|
| ಮಂಡ್ಯ | 194 | 4544.89 |
| ಮದ್ದೂರು | 105 | 2249.02 |
| ಮಳವಳ್ಳಿ | 62 | 880.09 |
| ಪಾಂಡವಪುರ | 137 | 1707.788 |
| ಶ್ರೀರಂಗಪಟ್ಟಣ | 84 | 1023.2 |
| ಕೆ.ಆರ್.ಪೇಟೆ | 87 | 1232.428 |
| ನಾಗಮಂಗಲ | 70 | 1039.47 |
| **ಒಟ್ಟು** | **739** | **12676.89** |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಪೂರ್ಣಗೊಂಡ ಕಾಮಗಾರಿಗಳ ಗುಣಮಟ್ಟ ಪರಿಶೀಲಿಸಿದ ಏಜೆನ್ಸಿ ಯಾವುದು (Q.C) ಹಾಗೂ ಏಜೆನ್ಸಿಯವರು ನೀಡಿದ ವರದಿಯ ಪ್ರತಿಯನ್ನು ಕಾಮಗಾರಿವಾರು ನೀಡುವುದು; | 1. ರೂ.50.00 ಲಕ್ಷ ಮೇಲ್ಪಟ್ಟ ಅಂದಾಜು ಮೊತ್ತದ ಕಾಮಗಾರಿಗಳನ್ನು ಪರಿಶೀಲಿಸಲು ಸರ್ಕಾರದ ಅಧಿಸೂಚನೆಯಂತೆ ಸಂಸ್ಥೆಯಲ್ಲಿ 3 ಹಂತದ ಗುಣನಿಯಂತ್ರಣ ವ್ಯವಸ್ಥೆ ಜಾರಿ ಯಲ್ಲಿರುತ್ತದೆ. ಇದರಲ್ಲಿ ವಿವಿಧ ಇಲಾಖೆಯ ನಿವೃತ್ತ ಮುಖ್ಯ ಅಭಿಯಂತರರು/ನಿವೃತ್ತ ಅಧೀಕ್ಷಕ ಅಭಿಯಂತರರು ಮತ್ತು ನಿವೃತ್ತ ಕಾರ್ಯಪಾಲಕ ಅಭಿಯಂತರರು /ತಾಂತ್ರಿಕ ಪ್ರಾಧ್ಯಾಪಕರು ರವರು ರಾಜ್ಯ ಗುಣನಿಯಂತ್ರಕರು ಹಾಗೂ ಜಿಲ್ಲಾ ಗುಣನಿಯಂತ್ರಕರು ಎಂಪ್ಯಾನಲ್‌ಮೆಂಟ್‌ನಲ್ಲಿ ಇರುತ್ತಾರೆ, ಕಾಮಗಾರಿಗಳ ಪ್ರತಿ ಹಂತದಲ್ಲಿ ಪರಿವೀಕ್ಷಣೆ ಮಾಡಿ ವರದಿ ಸಲ್ಲಿಸಲಾಗುತ್ತಿದೆ. |

| | | |
|---|---|---|
| | | 2. ಜಿಲ್ಲಾ ಸಮಾಜ ಕಲ್ಯಾಣ ಇಲಾಖೆಯಿಂದ ವಹಿಸುವ ಕಾಮಗಾರಿಗಳನ್ನು ಸದರಿ ಇಲಾಖೆಯ ವತಿಯಿಂದಲೇ 3ನೇ ವ್ಯಕ್ತಿ ತಪಾಸಣೆ ಮಾಡಲು M/s Assurence of Industrial Products and Services, Nidgundi, Basavana Bagevadi, Vijayapura Dist ನೇಮಿಸಲ್ಪಟ್ಟಿದ್ದು ಸದರಿಯವರು ಕಾಮಗಾರಿಗಳನ್ನು ಪರಿವೀಕ್ಷಣೆ ಮಾಡಿ ವರದಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಲಾಗುತ್ತಿದೆ.<br>3. ಮಾನ್ಯ ಲೋಕಸಭಾ / ರಾಜ್ಯಸಭಾ ಸದಸ್ಯರು ಹಾಗೂ ಶಾಸಕರು /ವಿಧಾನಪರಿಷತ್ ಸದಸ್ಯರು ವಹಿಸುವ ಕಾಮಗಾರಿಗೆ ಸಂಬಂಧಿಸಿದಂತೆ ರೂ.2.00 ಲಕ್ಷ ಒಳಪಟ್ಟ ಕಾಮಗಾರಿಗಳನ್ನು ತಾಲ್ಲೂಕಿನ ತಹಶೀಲ್ದಾರ್ ರವರು ಹಾಗೂ ರೂ.2.00 ಲಕ್ಷ ಮೇಲ್ಪಟ್ಟ ಕಾಮಗಾರಿಗಳನ್ನು ಸಂಬಂಧಪಟ್ಟ ಉಪವಿಭಾಗಾಧಿಕಾರಿಗಳು ಪರಿವೀಕ್ಷಣೆ ಮಾಡಿ ನೀಡಿದ ವರದಿಗಳನ್ನು ಮಾನ್ಯ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಲಾಗುತ್ತಿದೆ.<br>4. ಕಾವೇರಿ ನೀರಾವರಿ ನಿಗಮದಿಂದ ವಹಿಸಿರುವ ಕಾಮಗಾರಿಗಳನ್ನು ಸದರಿ ಇಲಾಖೆಯವರೇ ನಿಗದಿಪಡಿಸಿರುವ ಗುಣನಿಯಂತ್ರಣ ವಿಭಾಗದಿಂದಲೇ ಕಾಮಗಾರಿಗಳ ಪರಿಶೀಲನೆ ಮಾಡಲಾಗುತ್ತಿದೆ.<br>5. ವಿವಿಧ ಇಲಾಖೆಯಿಂದ ವಹಿಸುವ ಕಾಮಗಾರಿಗಳನ್ನು ಪ್ರಾಂಶುಪಾಲರು. ಪಿ.ಇ.ಎಸ್. ಕಾಲೇಜು ಮಂಡ್ಯ, ಪ್ರಾಂಶುಪಾಲರು, ಬಿ.ಇ.ಟಿ. ಕಾಲೇಜು, ಕೆ.ಎಂ.ದೊಡ್ಡಿ., ಪ್ರಾಂಶುಪಾಲರು, ಬಿ.ಜಿ.ಎಸ್. ಕಾಲೇಜು, ನಾಗಮಂಗಲ ರವರಿಂದ ಪರಿವೀಕ್ಷಣೆ ಮಾಡಿಸಿ ವರದಿ ಪಡೆಯಲಾಗಿರುತ್ತಿದೆ.<br>**ವರದಿಗಳನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ.** |
| ಈ) | ಕೆ.ಆರ್.ಐ.ಡಿ.ಎಲ್ ವತಿಯಿಂದ ನಿರ್ವಹಿಸಿದ ಮತ್ತು ನಿರ್ವಹಿಸುತ್ತಿರುವ ಕಾಮಗಾರಿಗಳು ಕಳಪೆ ಗುಣಮಟ್ಟದಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಕಳಪೆ ಕಾಮಗಾರಿಗಳನ್ನು ನಿರ್ವಹಿಸಿರುವವರ ಮೇಲೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು? (ವಿವರವಾದ ಮಾಹಿತಿ ನೀಡುವುದು) | ಕೆಆರ್‌ಐಡಿಎಲ್ ವತಿಯಿಂದ ನಿರ್ವಹಿಸಿದ ಮತ್ತು ನಿರ್ವಹಿಸುತ್ತಿರುವ ಕಾಮಗಾರಿಗಳು ಗುಣಮಟ್ಟದ ಕಾಮಗಾರಿಗಳಾಗಿರುತ್ತವೆ. ಕಳಪೆಯಾಗಿರುವ ಬಗ್ಗೆ ಯಾವುದೇ ದೂರುಗಳು ಸ್ವೀಕೃತವಾಗಿರುವುದಿಲ್ಲ. ದೂರುಗಳು ಬಂದಲ್ಲಿ ಸೂಕ್ತ ಕ್ರಮಕ್ಕಾಗಿ ಪರಿಶೀಲಿಸಬೇಕಿದೆ. |

ಸಂ.ಗ್ರಾಅಪ:10/1 :ಕಗ್ರಾಮೂ:2019

**(ಕೆ.ಎಸ್. ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು